# THE SPARROWS OF AGRA

AKBAR BIRBAL TALES

ಆಗ್ರಾ   ನಗರದ ಗುಬ್ಬಿಗಳು

ಅಕ್ಬರ್ ಬೀರ್ಬಲ್ ಕಥೆಗಳು



# The Sparrows of Agra

## ಆಗ್ರಾ ನಗರದ ಗುಬ್ಬಿಗಳು



**Tales of Akbar & Birbal**

ಅಕ್ಬರ್ ಬೀರಬಲ್ ಕಥೆಗಳು

Birbal was one of the gems in Emperor Akbar's court. He used his wit to help others and his fame had spread far and wide.

Yet, there were many who were jealous of him.

ಸಾಮ್ರಾ ಟ ಅಕ್ಬರನ ಆಸ್ಥಾನದಲ್ಲಿ ಬೀರಬಲ್ ಬಹಳ ಪ್ರ ಖ್ಯಾತಿ ಗಳಿಸಿದ್ದ . ಅವನ ಖ್ಯಾ ತಿ ಮತ್ತು ಸಹಾಯ ಮಾಡುವ ಗುಣ ಬಹಳ ದೂರದವರೆಗೂ ಹರಡಿತ್ತು .

ಕೆಲವರಿಗೆ ಇದು ಅಸೂಯೆಯನ್ನೂ ಉಂಟುಮಾಡಿತ್ತು .



**Chand was one such man. He saw how much Akbar liked Birbal and he thought, "I am more learned than anybody in the kingdom. I should be given Birbal's place."**

ಚಾಂದ್ ಅಂತಹ ವ್ಯಕ್ತಿಗಳಲ್ಲಿ ಒಬ್ಬ. ಅಕ್ಬರ್ ಬೀರಬಲ್ ನ ಬುದ್ಧಿವಂತಿಕೆಗಾಗಿ ಅವನನ್ನು ಇಷ್ಟ ಪಡುವುದು ತಿಳಿದಿತ್ತು. "ನಾನು ಇಲ್ಲಿ ಎಲ್ಲರಿಗಿಂತ ಹೆಚ್ಚು ತಿಳಿದವನು. ನನಗೆ ಬೀರಬಲ್ಲನ ಸ್ಥಾನ ದೊರಕಬೇಕು" ಎನ್ನುವುದು ಚಾಂದ್ ನ ಯೋಚನೆಯಾಗಿತ್ತು.





Chand decided that he would ask Birbal a very difficult question.
"When he fails to answer it, he will have to resign and I will become Akbar's favorite." he thought laughing to himself.

ಚಾಂದ್ ಯೋಚಿಸಿದ. “ ನಾನು  ಬೀರಬಲ್ಲನಿಗೆ ಅತೀ ಕಷ್ಟಕರವಾದ ಪ್ರಶ್ನೆ ಕೇಳುತ್ತೇನೆ. ಅದಕ್ಕೆ ಅವನ ಬಳಿ ಉತ್ತರ ಹೇಳಲಾಗದೆ ಸೋಲೊಪ್ಪುತ್ತಾನೆ ನಂತರ ಅವನ ಹುದ್ದೆಗೆ ರಾಜೀನಾಮೆ ನೀಡುತ್ತಾನೆ. ಆಗ ನಾನು ಅಕ್ಬರ್ ನಿಗೆ ಹತ್ತಿರವಾಗುತ್ತೇನೆ” . ತನ್ನ ಯೋಚನೆಗೆ ಒಳಗೊಳಗೆ  ಅವನಿಗೆ ಸಂತಸವಾಯಿತು.

He went to Akbar's court and challenged Birbal.

"Birbal!" he called, "Can you tell me how many sparrows there are in Agra? You must give me the exact number."

ಅವನು ಅಕ್ಬರನ ದರ್ಭಾರಿಗೆ ಹೋಗಿ ಬೀರಬಲ್ಲನಿಗೆ ಹೀಗೆ ಸವಾಲು ಹಾಕುತ್ತಾನೆ.

“ ಬೀರಬಲ್ ನಮ್ಮ ಆಗ್ರಾ ನಗರದಲ್ಲಿ ಎಷ್ಟು ಗುಬ್ಬಿಗಳು ಇವೆಯೆಂದು ನಿನಗೆ ಗೊತ್ತೇ?, ನೀನು ನಿಖರವಾದ ಸಂಖ್ಯೆ ಹೇಳಬೇಕು”



Everybody in the court, including Akbar was puzzled.

"How can anybody count the number of sparrows?" they wondered.

ಈ ಪ್ರಶ್ನೆ  ಕೇಳಿ ಅಕ್ಬರನನ್ನೂ ಸೇರಿಸಿ ಎಲ್ಲರಿಗೂ ಆಶ್ಚರ್ಯವಾಯಿತು.

“ಯಾರಿಗೆ ತಾನೆ ನಗರದ ಎಲ್ಲಾ ಗುಬ್ಬಿಗಳನ್ನು ಎಣಿಸಲು ಸಾದ್ಯ?”



**However Birbal wasn't worried at all.**

**He calmly replied, "Give me time till tomorrow. In the morning, I will definitely give you the answer."**

ಆದರೆ ಬೀರಬಲ್ಲನಿಗೆ ಈ ಪ್ರಶ್ನೆ ಕೇಳಿ ಅಳುಕಾಗಲಿಲ್ಲ.

ಅವನು ಸಾವಧಾನದಿಂದ ಉತ್ತರಿಸಿದ. " ನಾಳೆಯವರೆಗೆ ನನಗೆ ಸಮಯ ಕೊಡಿ. ನಾಳೆ ಬೆಳಿಗ್ಗೆ ನಿಮ್ಮ ಪ್ರಶ್ನೆಗೆ ಉತ್ತರ ಖಂಡಿತಾ ನೀಡುವೆ"



**The next day, everyone had gathered in the court to hear Birbal's answer.**

**Akbar asked, "Well Birbal, can you tell us the number of sparrows in Agra?"**

ಮರುದಿನ ದರ್ಭಾರಿನಲ್ಲಿ ಎಲ್ಲರೂ ಬೀರಬಲ್ಲನ ಉತ್ತರಕ್ಕಾಗಿ ಕುತೂಹಲದಿಂದ ಕಾಯುತ್ತಿದ್ದರು.

ಅಕ್ಬರನು ಕೇಳಿದ " ಬೀರಬಲ್ ಆಗ್ರಾದಲ್ಲಿ ಎಷ್ಟು ಗುಬ್ಬಿಗಳು ಇವೆಯೆಂದು ಹೇಳು"

**Birbal smiled as he said, "There are exactly 19,537 sparrows! You can count for yourself and check."**



ಬೀರಬಲ್ಲ ನಗುತ್ತಾ  ಉತ್ತರಿಸಿದ. " ಆಗ್ರಾದಲ್ಲಿ 19,537 ಗುಬ್ಬಿಗಳಿವೆ. ಅನುಮಾನವಿದ್ದಲ್ಲಿ ನೀವೇ ಎಣಿಸಿ ನೋಡಬಹುದು.

**Chand knew he could never count all the sparrows and he refused to believe him.**

**"How can you say that?" he demanded. "There may be more or less."**

ಚಾಂದ್ ನಿಗೆ ಎಲ್ಲಾ ಗುಬ್ಬಿಗಳನ್ನು ಎಣಿಸಲು ಅಸಾಧ್ಯ ಎಂದು ಗೊತ್ತಿತ್ತು. ಬೀರಬಲ್ಲನ ಉತ್ತರವನ್ನು ಅವನು ನಂಬಲು ಸಿದ್ಧನಿರಲಿಲ್ಲ.

"ಅದು ಹೇಗೆ ಹೇಳುತ್ತೀಯ? ನೀನು ಹೇಳುವುದಕ್ಕಿಂತ ಹೆಚ್ಚೂ ಇರಬಹುದು, ಕಡಿಮೆಯೂ ಇರಬಹುದಲ್ಲ " ಎಂದ.



"No, there are exactly 19,537 sparrows," said Birbal. He continued, "If there are less, it means that sparrows from the city have left to visit other places."



"ಇಲ್ಲ. ಖಂಡಿತವಾಗಿ ಇಲ್ಲಿ 19,537 ಗುಬ್ಬಿಗಳೇ ಇರುವುದು. ಒಂದು ವೇಳೆ ಇದಕ್ಕಿಂತ ಕಡಿಮೆ ಇದೆ ಎಂದರೆ ಅದರರ್ಥ ಇಲ್ಲಿಯ ಕೆಲವು ಗುಬ್ಬಿಗಳು ಬೇರೆ ಪಟ್ಟಣಗಳನ್ನು ನೋಡಲು ಹೋಗಿರಬಹುದು" ಬೀರಬಲ್ ಹೇಳಿದ.

**Akbar smiled. "And what if there are more sparrows?" he asked.**

**"Oh, those are the sparrows from different cities that have come to visit their relatives here!" Birbal replied immediately.**

ಬೀರಬಲ್ಲನ  ಉತ್ತರ ಕೇಳಿ ಅಕ್ಬರ್ ನಿಗೆ ನಗು ಬಂತು.

" ಒಂದು ವೇಳೆ ನೀನು ಹೇಳುವುದಕ್ಕಿಂತ ಹೆಚ್ಚು ಗುಬ್ಬಿಗಳು ಇದ್ದರೆ? ಅಕ್ಬರ್ ಪ್ರಶ್ನಿಸಿದ.

" ಹಾಗಿದ್ದಲ್ಲಿ ಬೇರೆ ಪಟ್ಟಣಗಳ ಕೆಲವು ಗುಬ್ಬಿಗಳು ಇಲ್ಲಿಯ ಬಂಧುಗಳನ್ನು ನೋಡಲು ಬಂದಿರಬಹುದು" ಬೀರಬಲ್  ತಕ್ಷಣ ಉತ್ತರಿಸಿದ.



**The whole court laughed at Birbal's clever answer.**

**Chand had to accept defeat and agree that Birbal was indeed the wisest man in the kingdom.**



ಬೀರಬಲ್ಲನ  ಬುದ್ಧಿವಂತಿಕೆಯ ಉತ್ತರ ಕೇಳಿ ಇಡೀ ದರ್ಭಾರಿನ ಜನರೆಲ್ಲಾ ನಕ್ಕರು

ಬೀರಬಲ್ ಬಹು ಬುದ್ಧಿವಂತನೆಂದು ಚಾಂದ್ ಒಪ್ಪಿಕೊಳ್ಳಬೇಕಾಯಿತು.

ಮುಕ್ತಾಯ